ಸಂಸ್ಥಾಪಕರು: ಪ್ರೊ ಎಂ.ವಿ. ಸೀತಾರಾಮಯ್ಯ

# ಹೊಂಗನಸು

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ವಾರ್ತಾಪತ್ರ



ಸಂಪುಟ: ೦೧ ಸಂಚಿಕೆ: ೦೧ ಫೆಬ್ರವರಿ ೨೦೧೫ ಸಂಪಾದಕರು : ಶ್ರೀ ಬಿ. ಆರ್. ರವೀಂದ್ರನಾಥ್



# ಶ್ರೀ. ಬಿ.ಎಸ್ ಸಣ್ಣಯ್ಯ ಅವರಿಗೆ 2015ರ ಶ್ರೀ ಸಾಹಿತ್ಯ ಪ್ರಶಸ್ತಿ

ಹಿರಿಯ ಸಂಶೋಧಕ , ಸಂಪಾದಕ ಮತ್ತು ಕೃತಿಕಾರ ಶ್ರೀ. ಬಿ.ಎಸ್ ಸಣ್ಣಯ್ಯ ಅವರಿಗೆ ಬಿ.ಎಂ. ಶ್ರೀ ಸ್ಮಾರಕ ಪ್ರತಿಷ್ಠಾನವು ಶ್ರೀ ಸಾಹಿತ್ಯ ಪ್ರಶಸ್ತಿಯನ್ನು ಶನಿವಾರ ಸಂಜೆ ಇಂಡಿಯನ್ ಇನಸ್ಟಿಟ್ಯೂಟ್ ಅಫ್ ವರ್ಲ್ಡ್ ಕಲ್ಚರ್‌ಸಭಾಂಗಣದಲ್ಲಿ ಕನ್ನಡ ಸಾಹಿತ್ಯ ಲೋಕದ ಬಹಳಷ್ಟು ಹಿರಿಯ ಕಿರಿಯ ವಿದ್ವಾಂಸರು, ಸಾಹಿತಿಗಳು ಹಾಗೂ ಸಾಹಿತ್ಯಾಭಿಮಾನಿಗಳ ಸಮ್ಮುಖದಲ್ಲಿ ನಾಡೋಜ ಡಾ. ಕಮಲಾ ಹಂಪನಾ ಪ್ರದಾನ ಮಾಡಿದರು.

ತಮ್ಮ ಮತ್ತು ಪುರಸ್ಕೃತರ ಅರವತ್ತು ವರ್ಷದ ಒಡನಾಟವನ್ನು ನೆನಪಿಸಿಕೊಂಡು ಎಲೆಯ ಮರೆಯ ಕಾಯಿಯಂತೆ ಪ್ರಚಾರದ ಹಂಬಲವಿಲ್ಲದೆ ಶ್ರಮ,ಶ್ರದ್ಧೆ ಮತ್ತು ಆಳವಾದ ಪಾಂಡಿತ್ಯ ಅಗತ್ಯವಿರುವ ಕೆಲಸದಲ್ಲಿ ಜೀವನವನ್ನೇ ಮುಡುಪಾಗಿಟ್ಟು ಮಾಡಿದ ಅಪಾರ ಸಾಧನೆಯನ್ನು ಎತ್ತಿ ತೋರಿಸಿದರು.

ಡಾ. ವೈ.ಸಿ. ಭಾನುಮತಿಯವರು ಕನ್ನಡ ಅಧ್ಯಯನ ಸಂಸ್ಥೆಯಲ್ಲಿನ ತಮ್ಮ ನಾಲ್ಕು ದಶಕದ ಅನುಭವದಿಂದ ಬಿ.ಎಸ್ ಸಣ್ಣಯ್ಯ ಅವರು ಹೇಗೆ ಹಸ್ತಪ್ರತಿ ಸಂಗ್ರಹಣೆ, ಸಂಪಾದನೆ ಮತ್ತು ಕೃತಿ ರಚನೆಗಾಗಿ 32 ವರ್ಷ **3ನೇ ಪುಟಕ್ಕೆ**



**ಚಂದಾ ವಿವರಗಳು**

**ವಾರ್ಷಿಕ ಚಂದಾ**
**ರೂ. ೨೦/-**

**ಐದು ವರ್ಷಗಳ ಚಂದಾ**
**ರೂ. ೧೦೦/-**

ವಿಳಾಸ
**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**
**ಸ್ಥಾಪನೆ : ೦೬-೦೫-೧೯೭೮**
**ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ**
ಬಿ.ಎಂ.ಶ್ರೀ. ಕಲಾಭವನ,
೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು - ೧೯
ದೂರವಾಣಿ:
೨೬೬೧೫೪೮೭೭,೨೬೬೭೬೭೭೩
ಇಮೇಲ್ :
bmsritrust@gmail.com

## ಸಂಪಾದಕೀಯ

**ಹೊಂಗನಸು**

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ವಾರ್ತಾಪತ್ರ ಈಗ ಹೊಸ ರೂಪದಲ್ಲಿ ಬಿಎಂಶ್ರೀಯವರ ಕವಿತೆಯ ಹೆಸರಿನಲ್ಲಿ ನಿಮ್ಮ ಕೈ ಸೇರಿದೆ.

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ಸಾಹಿತ್ಯದ ಚಟುವಟಿಕೆಗಳು ಹೆಚ್ಚಾಗುತ್ತಿವೆ. ಪ್ರತಿಷ್ಠಾನದ ಕಾರ್ಯಗಳಲ್ಲಿ ಹಲವಾರು ವೈವಿಧ್ಯತೆಗಳು ಕಂಡುಬರುತ್ತಿವೆ. ಪ್ರತಿಷ್ಠಾನದ ಮೇಲಿನ ಅಭಿಮಾನದಿಂದ ಹಲವಾರು ಸಹೃದಯ ಮಹನೀಯರುಗಳು ಸ್ಥಾಪಿಸಿರುವ ಹಾಗೂ ಹೊಸದಾಗಿ ಸ್ಥಾಪನೆಯಾಗುತ್ತಿರುವ ದತ್ತಿ ನಿಧಿಗಳ ಕಾರ್ಯಕ್ರಮಗಳನ್ನು ಶಿಸ್ತಿನಿಂದ, ಅರ್ಥಪೂರ್ಣವಾಗಿ ಹಾಗೂ ಸದಸ್ಯರಿಗೆ ಹಾಗೂ ಸಾಹಿತ್ಯಾಸಕ್ತರಿಗೆ ಆಸಕ್ತಿದಾಯಕವಾಗಿರಲು ಶ್ರಮ ವಹಿಸಿ ಆಯೋಜಿಸಲಾಗುತ್ತಿದೆ.

ಪ್ರತಿಷ್ಠಾನದ ಚಟುವಟಿಕೆಗಳ ಬಗ್ಗೆ ಸದಸ್ಯರಿಗೆ ಆದಷ್ಟೂ ಬೇಗನೆ ತಿಳಿಸುವ ತವಕ ನಮಗಿದೆ. 21ನೇ ಶತಮಾನದಲ್ಲಿ ನಾವು ಇಂದಿನ ಕಾಲಕ್ಕೆ ಅನುಗುಣವಾಗಿ ಶೀಘ್ರಗತಿಯಲ್ಲಿ ಎಲ್ಲವನ್ನೂ ನಿಭಾಯಿಸಬೇಕಾಗಿರುವುದರಿಂದ, ಇನ್ನು ಮುಂದೆ ಹೊಂಗನಸು ಮೂಲಕ ನಾವು ನಿಮಗೆ ಪ್ರತಿ ತಿಂಗಳು ಚಟುವಟಿಕೆಗಳ ಬಗ್ಗೆ ತಿಳಿಸುತ್ತೇವೆ.

ಜೊತೆಗೆ ಹೊಂಗನಸು ಮಾಸಿಕದಲ್ಲಿ ಹೊಸ ಅಂಕಣಗಳನ್ನು ಆರಂಭಿಸುವ ಉತ್ಸಾಹ ನಮಗಿದೆ. ಹಾಗೆಯೇ, ಕನ್ನಡ ಸಾಹಿತ್ಯ ಲೋಕದ ಎಲ್ಲರ ನಡುವಿನ ಸಂಪರ್ಕ ಸೇತುವಾಗಿ ಹೊಂಗನಸು ಹೊರಹೊಮ್ಮಲಿದೆ. ಕನ್ನಡ ಸಾಹಿತ್ಯದಲ್ಲಿನ ಪ್ರಮುಖ ಆಗುಹೋಗುಗಳನ್ನು ಇನ್ನು ಮುಂದೆ ಹೊಂಗನಸು ಮೂಲಕ ತಿಳಿದುಕೊಳ್ಳಬಹು ದಾಗಿರುತ್ತದೆ.

ಇವೆಲ್ಲವನ್ನು ಸಾಧಿಸಲು ನಮ್ಮ ಆಶೀರ್ವಾದ, ಬೆಂಬಲ ಹಾಗೂ ಸಹಕಾರಗಳು ನಮಗೆ ಅಗತ್ಯವಾಗುತ್ತವೆ. ಈ ಮಾಸಿಕದ ವಾರ್ಷಿಕ ಚಂದಾ ಹಣ ಕೇವಲ ರೂ. 20/ – ಆಗಿದ್ದು ಐದು ವರ್ಷಗಳ ಚಂದಾಹಣ ರೂ, 100/– ಮಾತ್ರ. ನೀವುಗಳು ಈ ಮಾಸಿಕಕ್ಕೆ ಚಂದಾದಾರರಾಗಲು ಕೋರುತ್ತೇವೆ. ಜೊತೆಗೆ ಕನ್ನಡದ ಸಾಹಿತ್ಯಾಸಕ್ತರನ್ನು ತಲುಪಲು ನೀವು ಹೊಂಗನಸು ಮೂಲಕ ಬಹು ಕಡಿಮೆ ವೆಚ್ಚದಲ್ಲಿ ತಲುಪಬಹುದಾಗಿರುತ್ತದೆ.

ಇದುವರೆಗೆ ತ್ರೈಮಾಸಿಕವಾಗಿ ಹೊರಬರುತ್ತಿದ್ದ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ವಾರ್ತಾಪತ್ರ ಕಾರಣಾಂತರಗಳಿಂದ ವಿಳಂಬಗೊಂಡಿರುತ್ತದೆ. ತಡವಾದುದಕ್ಕೆ ಕ್ಷಮೆ ಕೋರುತ್ತೇವೆ.

**ಬಿ. ಆರ್. ರವೀಂದ್ರನಾಥ್**
ಸಂಪಾದಕರು

### ಮಾರ್ಚ್ 2015ರಲ್ಲಿ ಆಯೋಜಿಸಲಾಗಿರುವ ಕಾರ್ಯಕ್ರಮಗಳು

*** ಸೋಸಲೆ ಅಯ್ಯಾಶಾಸ್ತ್ರಿ ದತ್ತಿ ಕಾರ್ಯಕ್ರಮ**

ಮಾರ್ಚ್ 2015 – ಎರಡನೇ ವಾರ

*** ತೀನಂ ಶ್ರೀ ದತ್ತಿ ಉಪನ್ಯಾಸ ಸರಣಿ**

ವಿಷಯ: ಭಾಷಾ ವಿಜ್ಞಾನಕ್ಕೆ ತೀನಂಶ್ರೀ ರವರ ಕೊಡುಗೆ
ಉಪನ್ಯಾಸಕಾರರು : ಪ್ರೊ ಆ.ರಾ. ಮಿತ್ರ
ಸ್ಥಳ :ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ

ದಿನಾಂಕ 14ನೇ ಮಾರ್ಚ್ 2015

*** ಶಾ. ಬಾಲೂ ರಾವ್ ಯುವ ಬರಹಗಾರ ಪ್ರಶಸ್ತಿ ಪ್ರದಾನ**

ಪ್ರಶಸ್ತಿ ಪುರಸ್ಕೃತರು ಶ್ರೀಮತಿ ಅಲಕಾ ಕಟ್ಟೆಮನೆ

**ಶಾ. ಬಾಲೂ ರಾವ್ ಅನುವಾದ ಪ್ರಶಸ್ತಿ ಪ್ರದಾನ**

ಪ್ರಶಸ್ತಿ ಪುರಸ್ಕೃತರು ಡಾ.ತಿಪ್ಪೇಸ್ವಾಮಿ
ಸ್ಥಳ :ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ

## ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ನಡೆದ ಪ್ರಮುಖ ಕಾರ್ಯಕ್ರಮಗಳು ಈಗ ಯೂ ಟ್ಯೂಬ್ ನಲ್ಲಿ ಲಭ್ಯ

ಸದಸ್ಯರು ಹಾಗೂ ವಿಶ್ವದಾದ್ಯಂತ ಇರುವ ಪ್ರತಿಷ್ಠಾನದ ಅಭಿಮಾನಿಗಳ ಅನುಕೂಲಕ್ಕಾಗಿ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ನಡೆದ ಪ್ರಮುಖ ಕಾರ್ಯಕ್ರಮಗ ಧ್ವನಿ ಮುದ್ರಿತ ಉಪನ್ಯಾಸಗಳು ಹಾಗೂ ವಿಡಿಯೋಗಳನ್ನು ಜನಪ್ರಿಯ ಯೂ ಟ್ಯೂಬ್ ನಲ್ಲಿ ಅಳವಡಿಸಲಾಗಿದೆ. ನಮ್ಮ ಕಾರ್ಯಕ್ರಮಗಳನ್ನು ಯೂಟ್ಯೂಬ್ ನಲ್ಲಿ ವೀಕ್ಷಿಸಲು ನೀವು ಮಾಡಬೇಕಾದುದು ಇಷ್ಟೇ:

ಜಾಲತಾಣ www.youtube.comಕ್ಕೆ ಭೇಟಿ ನೀಡಿ bmsri ಎಂದು ಟೈಪ್ ಮಾಡಿ. ಕೂಡಲೆ ನಾವು ಅಪ್ ಲೋಡ್ ಮಾಡಿರುವ ಎಲ್ಲಾ ಕಾರ್ಯಕ್ರಮಗಳು ಲಭ್ಯವಾಗುತ್ತವೆ. ಒಮ್ಮೆ ಭೇಟಿ ನೀಡಿ ನಿಮ್ಮ ಅಮೂಲ್ಯ ಸಲಹೆಗಳನ್ನು ನೀಡಬೇಕು ಎಂದು ಕೋರುತ್ತೇವೆ.

# ಶ್ರೀ. ಬಿ.ಎಸ್ ಸಣ್ಣಯ್ಯ ಅವರಿಗೆ 2015ರ ಶ್ರೀ ಸಾಹಿತ್ಯ ಪ್ರಶಸ್ತಿ

**ಮೊದಲನೇ ಪುಟದಿಂದ**

ಇಲಾಖೆಯಲ್ಲಿ ನಂತರ 22 ವರ್ಷ ಸಂಶೋಧನಾ ಸಂಸ್ಥೆಯಲ್ಲಿ ಅವಿರತ ಶ್ರಮಮಾಡಿ ಹಸ್ತಪ್ರತಿಗಳಲ್ಲಿದ್ದ ಸಾಹಿತ್ಯ ಮತ್ತು ಶಾಸ್ತ್ರವನ್ನು ಹೊರತಂದು ಮಾಡಿರುವ ಸಾಹಿತ್ಯ ಸೇವೆಯಿಂದ ಸಂಶೋಧನ ಮತ್ತು ಸಂಪಾದನಾ ರಂಗದ ದೊಡ್ಡಣ್ಣನಾಗಿರುವರು ಎಂದರು.

ಪ್ರಶಸ್ತಿ ಸ್ವೀಕರಿಸಿ ಮಾತನಾಡುತ್ತಾ ಎಂಬತ್ತೇಳರ ಹರಯದಲ್ಲೂ ಕೆಲಸ ಮಾಡಲು ಸಾಧ್ಯವಾಗಿರುವುದು ಗುರುಗಳಾದ ಡಿ.ಎಲ್ಎನ್ ಮತ್ತು ತ.ಸು. ಶಾಮರಾಯರ ಬೋಧನೆ, ಯಾವುದೇ ಕೆಲಸವಾದರೂ ನಿಷ್ಠೆ ಮತ್ತು ಶ್ರದ್ಧೆ ಯಿದ್ದರೆ ಸಾಧನೆ ಸಾಧ್ಯ, ಅದರಿಂದಾಗಿಯೇ ಮರಿಮಕ್ಕಳಾದಿಯಾಗಿ ಎಲ್ಲರೂ ನೆಮ್ಮದಿಯಿಂದಿರುವ ಕುಟುಂಬ ತಮ್ಮದು ಎಂದರು. ಅಲ್ಲದೆ ಪ್ರತಿಷ್ಠಾನ ಮಾಡುತ್ತಿರುವ ಉತ್ತಮ ಸೇವೆಗೆ ಒತ್ತಾಸೆಯಾಗಿ ತಮ್ಮಕೃತಿಗಳನ್ನು ಮತ್ತು 25 ಸಾವಿರ ರೂಪಾಯಿಗಳ ಕೊಡುಗೆ ನೀಡಿದರು

ಕರುಣಾಳು ಬಾ ಬೆಳಕೆ ಎಂಬ ಬಿ.ಎಂ.ಶ್ರೀ ಯವರ ಪ್ರಾರ್ಥನೆಯೊಂದಿಗೆ ಸಮಾರಂಭ ಪ್ರಾರಂಭವಾಯಿತು. ಪ್ರತಿಷ್ಠಾನದ ಅಧ್ಯಕ್ಷರಾದ ಡಾ. ಪಿ.ವಿ. ನಾರಾಯಣ ಅವರು ಎರಡನೆಯ ಶ್ರೀಸಾಹಿತ್ಯ ಪ್ರಶಸ್ತಿಯ ಆಯ್ಕೆಯ ವಿಧಾನವನ್ನುವಿವರಿಸುತ್ತಾ. ಈ ಪ್ರಶಸ್ತಿಗೆ ಕಾರಣರಾದ ಶ್ರೀಮತಿ ಕಮಲಿನಿ ಶಾ. ಬಾಲುರಾವ್ ಅವರ ಔದಾರ್ಯ ನೆನೆಯುತ್ತಾ ಪ್ರತಿಷ್ಠಾನದ ಕಾರ್ಯ ಚಟುವಟಿಕೆಗಳನ್ನು ವಿವರಿಸಿದರು.

ಕನ್ನಡ ಅಬಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರಾದ ಎಲ್. ಹನುಮಂತಯ್ಯನವರು ಇಂಥಹ ಅಪರೂಪದ ಸಮಾರಂಭಕ್ಕೆ ಕಾರಣವಾದ ಪ್ರತಿಷ್ಠಾನವನ್ನು ಅಭಿನಂದಿಸಿ , ಕನ್ನಡದ ವಿದ್ವತ್ ಕೆಲಸ ಮಾಡುತ್ತಿರುವ ಸಂಸ್ಥೆಗೆ ಪ್ರಾಧಿಕಾರ ಮತ್ತು ಸರ್ಕಾರ ಜೊತೆಯಾಗಿರುವದೆಂದು ಅಧ್ಯಕ್ಷ ಭಾಷಣದಲ್ಲಿ ಹೇಳಿದರು.

ಕಾರ್ಯದರ್ಶಿಗಳಾದ ರವೀಂದ್ರನಾಥ ಅವರು ಕಾರ್ಯಕ್ರಮ ನಿರೂಪಿಸಿದರು, ಅಬ್ದುಲ್ ಬಷೀರ್ ಅವರು ಅಭಿನಂದನೆ ಪತ್ರ ವಾಚನ ಮಾಡಿದರು.

ಶ್ರೀ ರಾಮಪ್ರಸಾದ, ಖಜಾಂಚಿ ಅವರ ವಂದನಾರ್ಪಣೆಯೊಂದಿಗೆ ಕಾರ್ಯಕ್ರಮ ಮುಕ್ತಾಯವಾಯಿತು.

'ಶ್ರೀ ಸಾಹಿತ್ಯ ಪ್ರಶಸ್ತಿ' ಪ್ರದಾನ ಸಮಾರಂಭ ಅದ್ದೂರಿಯಾಗಿ ಜರುಗಲು ಸಹಕರಿಸಿ ಉಪಕರಿಸಿದ ಸಾಹಿತಿ ಮಿತ್ರರುಗಳಿಗೆ ಹಾಗೂ ಅಭಿಮಾನಿ ವೃಂದಕ್ಕೆ ಪ್ರತಿಷ್ಠಾನ ಕೃತಜ್ಞತೆ ಸಲ್ಲಿಸುತ್ತಿದೆ.

**'ಶ್ರೀ ಸಾಹಿತ್ಯ ಪ್ರಶಸ್ತಿ' ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ನೀಡುತ್ತಿರುವ ವಿಶೇಷ ವಾರ್ಷಿಕ ಬಹುಮಾನವಾಗಿದ್ದು ಇದು ಕರ್ನಾಟಕ ಸಾಹಿತ್ಯ ಕ್ಷೇತ್ರದ ಹಿರಿಮೆ–ಗರಿಮೆಯನ್ನು ಹೆಚ್ಚಿಸುವ ಮೌಲ್ಯಾಧಾರಿತ ಪ್ರಶಸ್ತಿಯಾಗಿದೆ ಹಾಗೂ ಇದು 'ಕನ್ನಡ ಕಣ್ವ' 'ಶ್ರೀ' ಅವರ ಅನುಪಮ ಸಾಹಿತ್ಯ ಕೊಡುಗೆಗಳಿಗೆ ಸಲ್ಲುವ ಕನ್ನಡದ ಜನತೆಯ ಗೌರವದ ಸಂಕೇತ ಆಗಿದೆ ಎಂಬುದು ನಮ್ಮ ಅನಿಸಿಕೆ. ಈ ಪ್ರಶಸ್ತಿಗೆ ಕಾರಣಕರ್ತರಾದ ಬಿ.ಎಂ.ಶ್ರೀ. ಅವರ ಮೊಮ್ಮಗಳು ಶ್ರೀಮತಿ ಕಮಲಿನಿ ಶಾ. ಬಾಲುರಾವ್ ಅವರಿಗೆ ಹಾಗೂ ಕುಟುಂಬದ ಸರ್ವರಿಗೂ ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನ ಗೌರವಪೂರ್ಣ ಅಭಿನಂದನೆಗಳನ್ನು ಮತ್ತೊಮ್ಮೆ ಸಲ್ಲಿಸುತ್ತಿದೆ.**



## ಹಸ್ತಪ್ರತಿ ವಿಭಾಗದ ಮಾಸಿಕ ವರದಿ

**(ಜನವರಿ 2015)**

ಹಸ್ತಪ್ರತಿ ವಿಭಾಗದಲ್ಲಿ ಜನವರಿ ತಿಂಗಳಲ್ಲಿ ಮೂವರು ಸಿಬ್ಬಂದಿ, ನಾಲ್ವರು ಸ್ವಯಂ ಸೇವಕರು ಮತ್ತು ಹತ್ತು ಜನ ಪರಮಾರ್ಥ ಸಿದ್ಧಿ ಯೋಗ ಶಿಬಿರದಿಂದ ಪ್ರಾಯೋಜಿತ ಸ್ವಯಂ ಸೇವಕರು ನಿರ್ವಹಿಸಿದ ಕೆಲಸದ ವಿವರ.

ಶುಷ್ಕ ಶುದ್ಧೀಕರಣ 108 ಗ್ರಂಥಗಳು, ತೈಲ ಲೇಪನ 10 ಗ್ರಂಥಗಳು, ಮಸಿ ಲೇಪನ – 48 ಗ್ರಂಥಗಳು, ಜೋಡಣೆ ಮತ್ತು ಕ್ರಮಸಂಖ್ಯೆ – 20 ಗ್ರಂಥಗಳು. ಪರಿಷ್ಕರಣೆ ಮತ್ತು ಸೂಚಿ ತಯಾರಿಕೆ 30 ಗ್ರಂಥಗಳು, ಸ್ಕ್ಯಾನಿಂಗ್ ಮಾಡಿರುವುದು 36 ಗ್ರಂಥಗಳು, ಇಮೇಜ್ ಕ್ರಾಪಿಂಗ್ ಗ್ರಂಥಗಳು 8, ಗೂಗಲ್ ಅಪ್ ಲೊಡ್ 26 ಗ್ರಂಥಗಳು, ಅಟ್ಟೆ ಕಟ್ಟಿರುವುದು 25 ಗ್ರಂಥಗಳು ಮತ್ತು ಬಟ್ಟೆ ಕಟ್ಟಿರುವುದು 50 ಕೃತಿಗಳು

## ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನ, ಬೆಂಗಳೂರು ಗ್ರಂಥಾಲಯದ ರೂಪ ರೇಷೆಗಳು

ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನ, ಬೆಂಗಳೂರು, ಗ್ರಂಥಾಲಯ 1979ರಲ್ಲಿ ಸ್ಥಾಪನೆಯಾಯಿತು. ಸ್ಥಾಪನಾ ವರ್ಷದಿಂದಲೇ ಶ್ರೀಯುತ ಎಂ.ವಿ.ಸೀ.ಯವರು ತಮ್ಮದೇ ಪುಸ್ತಕ ಸಂಗ್ರಹವನ್ನು ಮೂಲ ದ್ರವ್ಯವಾಗಿ ಬಳಸಿ ಈ ಸಂಸ್ಥೆಯ ಗ್ರಂಥಾಲಯವನ್ನು ಪ್ರಾರಂಭಿಸಿದರು. ಅಂದಿನಿಂದ ಇಂದಿನವರೆಗೆ ಶೇಖರಣೆಯಾದ ಒಟ್ಟು ಗ್ರಂಥಗಳ ಸಂಖ್ಯೆ 26000 ಹಾಗೂ ನಿಯತಕಾಲಿಕೆಗಳ ಸಂಖ್ಯೆ 7100.

ಈ ಅಮೂಲ್ಯವಾದ ಗ್ರಂಥಗಳನ್ನು ವೈಜ್ಞಾನಿಕವಾಗಿ ವಿಂಗಡಿಸಿ ಜೋಡಿಸಲಾಗಿದೆ. ಹಾಗೂ ಎಲ್ಲ ಪುಸ್ತಕಗಳ ಮಾಹಿತಿಯನ್ನು ಗಣಕಯಂತ್ರದಲ್ಲಿ ದಾಖಲಿಸಲಾಗಿದೆ. ಹೀಗಾಗಿ ಲಭ್ಯವಿರುವ ಪುಸ್ತಕವನ್ನು ಸುಲಭವಾಗಿ ಹುಡುಕಬಹುದು. ಓದುಗರಿಗೆ ಸಹಾಯವಾಗುವುದಕ್ಕಾಗಿ ಎಲ್ಲ ಕಪಾಟುಗಳ ಮೇಲೆ ವಿವರಣಾ ಪಟ್ಟಿಯನ್ನು ಲಗತ್ತಿಸಲಾಗಿದೆ.

ಈ ಅಮೂಲ್ಯ ಹಾಗೂ ಅಪರೂಪವಾದ ಪುಸ್ತಕ ಸಂಗ್ರಹದ ಪ್ರಯೋಜನವನ್ನು ಪ್ರತಿಷ್ಠಾನದ ಸದಸ್ಯರು ಪಡೆಯಬೇಕಾಗಿ ಕೋರಲಾಗಿದೆ.

## ಫೆಬ್ರವರಿ 2015ರಲ್ಲಿ ಪ್ರತಿಷ್ಠಾನದಲ್ಲಿ ಆಯೋಜಿಸಲಾಗಿರುವ ಕಾರ್ಯಕ್ರಮಗಳು

**ದಿನಾಂಕ 9ನೇ ಫೆಬ್ರವರಿ ಹಾಗೂ 10ನೇ ಫೆಬ್ರವರಿ 2015**

ಎಂಇಎಸ್ ಕಾಲೇಜು, ಮಲ್ಲೇಶ್ವರಂ ಹಾಗೂ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ಸಹಯೋಗದಲ್ಲಿ

ನವ್ಯ ಪ್ರಜ್ಞೆ ಸ್ವರೂಪ ಭೇದ (ಯು.ಆರ್. ಅನಂತಮೂರ್ತಿ ಹಾಗೂ ಯಶವಂತ ಚಿತ್ತಾಲರ ಸಾಹಿತ್ಯದ ಸೂಕ್ಷ್ಮಗಳನ್ನು ಕುರಿತ 2 ದಿನದ ರಾಷ್ಟ್ರೀಯ ವಿಚಾರ ಸಂಕಿರಣ

ಸ್ಥಳ : ಎಂಇಎಸ್ ಕಾಲೇಜು, ಮಲ್ಲೇಶ್ವರಂ ಸಮಯ ಪ್ರತಿದಿನ ಬೆಳಿಗ್ಗೆ 10 ರಿಂದ 4 ಘಂಟೆ

ದಿನಾಂಕ 9ನೇ ಫೆಬ್ರವರಿ ಬೆಳಿಗ್ಗೆ 10ಘಂಟೆ :ಉದ್ಘಾಟನೆ ಶ್ರೀಮತಿ ವಿಮಲಾ ರಂಗಾಚಾರ್

ದಿನಾಂಕ 10ನೇ ಫೆಬ್ರವರಿ 2015 4 ಘಂಟೆ ಸಮಾರೋಪ : ಅಧ್ಯಕ್ಷತೆ ಡಾ. ಪಿ.ವಿ. ನಾರಾಯಣ

ಉಪನ್ಯಾಸಕಾರರು : ಡಾ. ಜಿಬಿ ಹರೀಶ್,ಪ್ರೊ ದಿವಾಕರ್, ಡಾ. ಎಂಎಸ್ ಆಶಾದೇವಿ, ಡಾ.ತ್ಯಾಗರಾಜ್, ಶ್ರೀಮತಿ ಜ್.ನಾ. ತೇಜಶ್ರೀ, ಡಾ. ಹೆಚ್.ಎಸ್. ರಾಘವೇಂದ್ರರಾವ್, ಡಾ. ನಟರಾಜ್ ಹುಳಿಯಾರ್, ಡಾ. ಮನು ಚಕ್ರವರ್ತಿ

**ದಿನಾಂಕ 14ನೇ ಫೆಬ್ರವರಿ 2015**

ತೀನಂ ಶ್ರೀ ದತ್ತಿ ಉಪನ್ಯಾಸ ಸರಣಿ

ವಿಷಯ: ಭಾರತೀಯ ಕಾವ್ಯ ವಿಮಾಂಸೆ

ಉಪನ್ಯಾಸಕಾರರು : ಪ್ರೊ ಆ.ರಾ. ಮಿತ್ರ

**ದಿನಾಂಕ 16ನೇ ಫೆಬ್ರವರಿ 2015**

ಕೆ.ಎಸ್. ನರಸಿಂಹ ಸ್ವಾಮಿ – ಒಂದು ನೆನಪು

ಕವಿತೆ ಗಾಯನ

ಉಪನ್ಯಾಸ : ಶ್ರೀ ಬಾಲಕೃಷ್ಣ ಕೆ. ಎನ್.

ಸಾಕ್ಷ್ಯ ಚಿತ್ರ ಪ್ರದರ್ಶನ

**ದಿನಾಂಕ 16ನೇ ಫೆಬ್ರವರಿ 2015**

ಎಂಎ ಜಯಚಂದ್ರ ದತ್ತಿ ಕಾರ್ಯಕ್ರಮ

ಉಪನ್ಯಾಸ : ಡಾ. ಜಿ.ಬಿ. ಹರೀಶ್

ವಿಷಯ: ದೇವಚಂದ್ರನ ರಾಜಾವಳಿ ಕಥಾಸಾರ

**ದಿನಾಂಕ 27ನೇ ಫೆಬ್ರವರಿ 2015**

ಸಂಶೋಧನಾ ದಿನ – ಎಂಫಿಲ್ ವಿದ್ಯಾರ್ಥಿಗಳಿಗೆ ಪದವಿ ಪ್ರದಾನ

ಮುಖ್ಯ ಅತಿಥಿ: ಡಾ. ನಿತ್ಯಾನಂದ ಬಿ ಶೆಟ್ಟಿ, ಅಧ್ಯಕ್ಷರು, ಡಿವಿಜಿ ಕನ್ನಡ ಅಧ್ಯಯನ ಕೇಂದ್ರ, ತುಮಕೂರು ವಿಶ್ವವಿದ್ಯಾಲಯ

ದಿನಾಂಕ 28ನೇ ಫೆಬ್ರವರಿ 2015

ಸಿರಿಸಂಗೀತ

ಎಸ್. ಪ್ರವೀಣ್ ಕುಮಾರ್ ಸಂಗಡಿಗರಿಂದ : ಭಕ್ತಿ ಗೀತೆಗಳ ಗಾಯನ

# ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ಜನವರಿ 2015 ತಿಂಗಳಿನಲ್ಲಿ ನಡೆದ ಕಾರ್ಯಕ್ರಮಗಳು



**ಪುಸ್ತಕದಾನ ಕಾರ್ಯಕ್ರಮ**

ದಿನಾಂಕ 7ನೇ ಜನವರಿ 2015ರಂದು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ವತಿಯಿಂದ ಪ್ರಕಟಗೊಳಿಸಿರುವ ಸುಮಾರು 8500 ಪುಸ್ತಕಗಳನ್ನು ಅಕ್ಷಯಪಾತ್ರಾ ಫೌಂಡೇಶನ್ ಗೆ ದಾನದ ರೂಪದಲ್ಲಿ ಹಸ್ತಾಂತರಗೊಳಿಸಲಾಯಿತು. ಈ ಪುಸ್ತಕಗಳನ್ನು ಅಕ್ಷಯಪಾತ್ರಾ ಫೌಂಡೇಶನ್ ರವರು ತಮ್ಮ ವತಿಯಿಂದ ಶಾಲಾ ಮಕ್ಕಳಿಗೆ ಮಧ್ಯಾನದ ಬಿಸಿ ಊಟ ನೀಡುವ ಶಾಲೆಗಳ ಗ್ರಂಥಾಲಯ, ಶಿಕ್ಷಕರು ಹಾಗೂ ವಿದ್ಯಾರ್ಥಿಗಳಿಗೆ ಉಚಿತವಾಗಿ ವಿತರಿಸುವ ಜವಾಬ್ದಾರಿಯನ್ನು ಹೊತ್ತಿರುತ್ತಾರೆ. ಈ ಕಾರ್ಯಕ್ರಮವನ್ನು ಪ್ರತಿಷ್ಠಾನದಲ್ಲಿ ಹಲವುತಿಂಗಳುಗಳ ಹಿಂದೆಯೇ ರೂಪಿಸಲಾಗಿದ್ದು ಈ ದಿನದಂದು ಕಾರ್ಯಗತಗೊಂಡಿತು.ಅಕ್ಷಯಪಾತ್ರಾ ಫೌಂಡೇಶನ್ ನ ಜನರಲ್ ಮ್ಯಾನೇಜರ್ ಶ್ರೀ ವಿನಯ್ ಕುಮಾರ್ ರವರಿಗೆ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಅಧ್ಯಕ್ಷರಾದ ಡಾ.ಪಿವಿ ನಾರಾಯಣ ರವರು ಸಾಂಕೇತಿಕವಾಗಿ ಹಲವು ಪುಸ್ತಕಗಳನ್ನು ಹಸ್ತಾಂತರಿಸಿದರು. ಅಕ್ಷಯಪಾತ್ರಾ ಫೌಂಡೇಶನ್ ನ ಶ್ರಿ ಸಿ.ವಿ. ತಿರುಮಲರಾವ್ ರವರು ಹಾಗೂ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಎಲ್ಲಾ ಪದಾಧಿಕಾರಿಗಳು ಉಪಸ್ಥಿತರಿದ್ದರು. ಇದೇ ಸಂದರ್ಭದಲ್ಲಿ ಬೆಂಗಳೂರಿನ ಕೆಲವು ಬಿಬಿಎಂಪಿ ಶಾಲೆಗಳ ಪ್ರತಿನಿಧಿಗಳಿಗೆ ಹಲವಾರು ಪುಸ್ತಕಗಳನ್ನು ಶ್ರೀ ವಿನಯ್ ಕುಮಾರ್ ಹಾಗೂ ಡಾ. ಪಿವಿ ನಾರಾಯಣ ರವರು ಸಾಂಕೇತಿಕವಾಗಿ ಹಸ್ತಾಂತರಿಸಿದರು.

**ದಿ. ವೆಂಕಟರಾಮಯ್ಯ – ಪುಟ್ಟಚ್ಚಮ್ಮ ದತ್ತಿ ಕಾರ್ಯಕ್ರಮ**

ದಿನಾಂಕ : 10ನೇ ಜನವರಿ 2015

ಪ್ರಶಸ್ತಿ ವಿಜೇತರು ರಾಂ. ಎಲ್ಲಂಗಳ, ಮಂಗಳೂರು

ಕೃತಿಯ ಹೆಸರು ಬಹುಮಾನ(ಮಕ್ಕಳ ನಾಟಕಗಳು)

ಈ ದತ್ತಿ ಪ್ರಶಸ್ತಿಯನ್ನು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ






ಕಾರ್ಯಕಾರಿ ಸಮಿತಿ ಸದಸ್ಯರು ಹಾಗೂ ನಿಕಟಪೂರ್ವ ಗೌರವ ಕಾರ್ಯದರ್ಶಿ, ಪ್ರಸಿದ್ಧ ಲೇಖಕರು ಶ್ರೀ ಎಸ್.ವಿ ಶ್ರೀನಿವಾಸರಾವ್ ರವರು ಸ್ಥಾಪಿಸಿರುತ್ತಾರೆ. ಈ ವರ್ಷದ ಪ್ರಶಸ್ತಿಗೆ ಮಂಗಳೂರಿನ ಶ್ರೀ ರಾಂ.ಎಲ್ಲಂಗಳ ರವರಿಗೆ ಸಂದಿರುತ್ತದೆ. ಈ ಪ್ರಶಸ್ತಿಯನ್ನು ಶ್ರೀ ಎಸ್.ವಿ ಶ್ರೀನಿವಾಸರಾವ್ ರವರ ಉಪಸ್ಥಿತಿಯಲ್ಲಿ ಪ್ರೊ. ಆ.ರಾ. ಮಿತ್ರ ರವರು ಪ್ರದಾನ ಮಾಡಿದರು.

ಶ್ರೀ ಎಸ್.ವಿ ಶ್ರೀನಿವಾಸರಾವ್ ರವರು ತಮ್ಮ ಅನಾರೋಗ್ಯದ ನಡುವೆಯೂ ಪ್ರಶಸ್ತಿ ಪ್ರದಾನ ಕಾರ್ಯಕ್ರಮದಲ್ಲಿ ಭಾಗವಹಿಸಿ ಪ್ರಶಸ್ತಿಯನ್ನು ಕುರಿತು ಮಾತನಾಡಿ ಪ್ರಶಸ್ತಿ ಪುರಸ್ಕೃತರಿಗೆ ಹಾರೈಸಿದರು. ಪ್ರಶಸ್ತಿ ಪುರಸ್ಕೃತ ಶ್ರೀ ರಾಂ ಎಲ್ಲಂಗಳ ರವರು ಶ್ರೀ ಎಸ್.ವಿ ಶ್ರೀನಿವಾಸರಾವ್ಹಾಗೂ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ಕ್ಕೆ ವಂದಿಸಿ ತಮ್ಮ ಕೃತಿಗೆ ಲಭಿಸಿದ ಗೌರವಕ್ಕೆ ಸಂತಸಪಟ್ಟರು.

**ತೀನಂ ಶ್ರೀ ದತ್ತಿ ಉಪನ್ಯಾಸ ಸರಣಿ**

ಅದೇ ದಿನ ಜನವರಿ 10 ರಂದು ಪ್ರೊ.ಆ.ರಾ. ಮಿತ್ರ ತೀನಂಶ್ರೀ ರವರ ಕಾವ್ಯಗಳ ಬಗ್ಗೆ ವಿವರಣಾತ್ಮಕ ವಿದ್ವತ್ ಪೂರ್ಣ ಉಪನ್ಯಾಸವನ್ನು ನೀಡಿದರು.ತೀನಂಶ್ರೀ ರವರ ಕಾವ್ಯಗಳ ಬಗ್ಗೆ ತಿಳಿದುಕೊಳ್ಳುವ ಉತ್ಸಾಹ ಹಾಗೂ ಪ್ರೊ. ಆ ರಾ ಮಿತ್ರರವರ






ಹಾಸ್ಯಭರಿತ ಉಪನ್ಯಾಸವನ್ನು ಕೇಳಲು ನಾಡಿನ ಹಲವಾರು ವಿದ್ವಾಂಸರು, ಗೌರವಾನ್ವಿತ ಅತಿಥಿಗಳನ್ನು ಒಳಗೊಂಡಂತೆ ಹೆಚ್ಚಿನ ಸಂಖ್ಯೆಯಲ್ಲಿ ಪ್ರತಿಷ್ಠಾನದ ಸದಸ್ಯರು ಹಾಗೂ ಅಭಿಮಾನಿಗಳು ಸೇರಿದ್ದರು.

ದಿನಾಂಕ 17ನೇ ಜನವರಿ 2015 ರಂದು ಕಣಕಟ್ಟೆ ಕೃಷ್ಣಮೂರ್ತಿರಾವ್ ದತ್ತಿ ಕಾರ್ಯಕ್ರಮದಡಿಯಲ್ಲಿ ಕುಮಾರಿ ಸುರಭಿ ರಾಮಚಂದ್ರ ಹಾಗೂ ತಂಡದವರಿಂದ ಕರ್ನಾಟಕ ಶಾಸ್ತ್ರೀಯ ಕಾರ್ಯಕ್ರಮವನ್ನು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ನಡೆಸಲಾಯಿತು.

ದಿನಾಂಕ 28ನೇ ಜನವರಿ 2015ರಂದು ಶ್ರೀ ಶಂಬಾ ಜೋಷಿ, ಶ್ರೀ ಎಂಜಿ ನಂಜುಂಡಾರಾಧ್ಯ ಮತ್ತು ಶ್ರೀ ಟಿಎನ್ ಮಹಾದೇವಯ್ಯ ಸ್ಮಾರಕ ದತ್ತಿ ಕಾರ್ಯಕ್ರಮದಡಿಯಲ್ಲಿ ದಾಸ ಸಾಹಿತ್ಯ ಮತ್ತು ಸಂಸ್ಕೃತಿ ವಿಷಯದ ಬಗ್ಗೆ ಬೆಂಗಳೂರಿನ ವಿಜಯಾ ಕಾಲೇಜಿನ ಕನ್ನಡ ಪ್ರಾಧ್ಯಾಪಕರಾದ ಪ್ರೊ ಎಸ್.ಎಲ್ ಮಂಜುನಾಥ್ ರವರು ರಸವತ್ತಾಗಿ ವಿದ್ವತ್ ಪೂರ್ಣವಾಗಿ ವಿಷಯ ಮಂಡನೆ ಮಾಡಿದರು. ದಾಸಸಾಹಿತ್ಯಕ್ಕೆ ಮೊದಲ ಬುನಾದಿ ಹಾಕಿಕೊಟ್ಟ ಶ್ರೀಮನ್ ಮಧ್ವಾಚಾರ್ಯರ ಕೊಡುಗೆಯಿಂದ ಪ್ರಾರಂಭಿಸಿ ಪುರಂದರದಾಸರು ಹಾಗೂ ನಂತರದ ಮಹನೀಯರುಗಳು ನೀಡಿದ ಕೊಡುಗೆಗಳ ಉಲ್ಲೇಖಗಳ ಸಹಿತ ದಾಸ ಸಾಹಿತ್ಯ ಮತ್ತು ಸಂಸ್ಕೃತಿ ಇವುಗಳ ನಡುವಿನ ಸಂಬಂಧಗಳ ವಿಶ್ಲೇಷಣೆ ಮಾಡಿದರು.

ಅಧ್ಯಕ್ಷತೆ ವಹಿಸಿದ್ದ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಅಧ್ಯಕ್ಷರಾದ ಡಾ.ಪಿವಿ ನಾರಾಯಣ ರವರು ಪಾಂಡಿತ್ಯಪೂರ್ಣ ಕಿರು ಉಪನ್ಯಾಸ ನೀಡಿ ದಾಸಸಾಹಿತ್ಯ ಹಾಗೂ ವಚನ ಸಾಹಿತ್ಯಗಳ ಉಗಮ ಹಾಗೂ ನಂತರದ ಬೆಳವಣಿಗೆಗಳು ನಮ್ಮ ನಾಡಿನ ಸಂಸ್ಕೃತಿಯ ಮೇಲೆ ಬೀರಿದ ಪ್ರಭಾವಗಳನ್ನು ವಿಶ್ಲೇಷಿಸಿ ಪ್ರೊ.ಎಸ್. ಎಲ್ ಮಂಜುನಾಥ್ ರವರ ವಿಷಯಮಂಡನೆಯನ್ನು ಹೊಗಳಿದರು.

ದಿನಾಂಕ 31ನೇ ಜನವರಿ 2015 ರಂದು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ತಿಂಗಳ ಸಾಂಸ್ಕೃತಿಕ ಕಾರ್ಯಕ್ರಮವಾದ ಸಿರಿಸಂಗೀತ ಕಾರ್ಯಕ್ರಮದಲ್ಲಿ ಶ್ರೀಮತಿ ಎಸ್. ಜಿ ಮಾಲತಿ ಶೆಟ್ಟಿ ಮತ್ತು ಶ್ರೀ ಎಂ.ಆರ್.ಅನಂತಮೂರ್ತಿ ಮತ್ತು ತಂಡದವರು ಸುಗಮ ಸಂಗೀತ ಕಾರ್ಯಕ್ರಮವನ್ನು ನಡೆಸಿಕೊಟ್ಟರು.

# ಪ್ರತಿಷ್ಠಾನದ 2014–15ನೇ ಸಾಲಿನ ಕ್ರಿಯಾಯೋಜನೆ

ಕರ್ನಾಟಕ ಸರ್ಕಾರವು ಬಿಡುಗಡೆ ಮಾಡಬಹುದಾದ ಅನುದಾನದ ಮೊತ್ತ ಸಾಕಾಗುವಷ್ಟು ಇದ್ದಲ್ಲಿ ಬಿ.ಎಂ.ಶ್ರೀ ಪ್ರತಿಷ್ಠಾನವು ಒಟ್ಟು ರೂ. 65,50,000/– ರಷ್ಟು ಹಣವನ್ನು ವೆಚ್ಚಮಾಡಲು ಉದ್ದೇಶಿಸಿರುತ್ತದೆ. ಅದರಲ್ಲಿ, ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಜಾಲತಾಣದ ನವೀಕರಣ ಮತ್ತು ಅದರ ನಿರ್ವಹಣೆ, ವಾರ್ಷಿಕ ಹಸ್ತಪ್ರತಿ ಅಧ್ಯಯನ ಸಮಾವೇಶ, ಕಳೆದ ವರ್ಷದ ಹಸ್ತಪ್ರತಿ ಸಮಾವೇಶ ಸಂಪುಟ ಮುದ್ರಣ, ಹಳಗನ್ನಡ ತರಗತಿಗಳು–ಛಂದಸ್ಸಿನ ಅಧ್ಯಯನ, 'ಕರ್ನಾಟಕ ಲೋಚನ', ವಾರ್ತಾಪತ್ರ, ಸಾಹಿತ್ಯೋಪಾಸಕರು–ಹನ್ನೆರಡು ಉಪನ್ಯಾಸಗಳ ಸಂಕಲನ, ಸಿರಿಸಂಗೀತ– ಸಾಂಸ್ಕೃತಿಕ ಕಾರ್ಯಕ್ರಮ, ಪ್ರಶಸ್ತಿ ಪ್ರಧಾನ ಕಾರ್ಯಕ್ರಮಗಳು, ವಿವಿಧ ದತ್ತಿ ಕಾರ್ಯಕ್ರಮಗಳು, ಗ್ರಂಥಾಲಯ ನಿರ್ವಹಣೆ, ಎಂ.ಫಿಲ್, ಮತ್ತು ಪಿಎಚ್.ಡಿ, ವಿದ್ಯಾರ್ಥಿಗಳಿಗಾಗಿ ಸಂಶೋಧನ ಕಮ್ಮಟ, ಬೆಳ್ಳೂರು ಶಾಖೆಯ ಕಾರ್ಯಕ್ರಮಗಳಿಗಾಗಿ, ಹಳಗನ್ನಡ ಚಂಪೂ ಕುರಿತ ವಿಚಾರ ಸಂಕಿರಣ, ಯು.ಆರ್. ಅನಂತಮೂರ್ತಿ ಸಾಹಿತ್ಯ ಕುರಿತ ವಿಚಾರ ಸಂಕಿರಣ, ಕಟ್ಟಡದ ನವೀಕರಣ ವೆಚ್ಚ, ಹಸ್ತಪ್ರತಿ ಸಂರಕ್ಷಣೆ ಮತ್ತು ಡಿಜಿಟಲೈಸೇಷನ್, ಮಾಧ್ಯಮ ಬರವಣಿಗೆ ಕುರಿತ ಸ್ನಾತಕೋತ್ತರ ಡಿಪ್ಲೊಮೊ, ಐದು ಮಂದಿ ಸಂಶೋಧಕರ ಬಗೆಗಿನ ಸಾಕ್ಷಚಿತ್ರ ನಿರ್ಮಾಣ ಇವುಗಳನ್ನು ಹಮ್ಮಿಕೊಳ್ಳಲಾಗಿದೆ

**ಶಾ. ಬಾಲೂರಾವ್ ಅನುವಾದ ಪ್ರಶಸ್ತಿ ಹಾಗೂ ಶಾ. ಬಾಲೂರಾವ್ ಯುವ ಬರಹಗಾರ ಪ್ರಶಸ್ತಿ**

ಶಾ. ಬಾಲೂರಾವ್ ಅನುವಾದ ಪ್ರಶಸ್ತಿ ಹಾಗೂ ಶಾ. ಬಾಲೂರಾವ್ ಯುವ ಬರಹಗಾರ ಪ್ರಶಸ್ತಿಗಳಿಗಾಗಿ ಅರ್ಜಿಗಳನ್ನು ಕರೆದಿದ್ದು ಈವರೆಗೆ ಅನುವಾದ ಪ್ರಶಸ್ತಿಗಾಗಿ 60 ಕೃತಿಗಳು ಹಾಗೂ ಯುವ ಬರಹಗಾರ ಪ್ರಶಸ್ತಿಗಾಗಿ 50 ಕೃತಿಗಳುನ್ನು ಸ್ವೀಕರಿಸಲಾಗಿದ್ದು ಪ್ರತಿಷ್ಠಾನವು ರಚಿಸಿರುವ ಮೌಲ್ಯಮಾಪನಾ ಸಮಿತಿಯು ಈ ಕೃತಿಗಳನ್ನು ಪರಿಶೀಲಿಸಿ ಪ್ರಶಸ್ತಿಗಳನ್ನು ಈ ಕೆಳಕಂಡಂತೆ ಪ್ರಕಟಗೊಳಿಸಿರುತ್ತದೆ.:

* ಶಾ. ಬಾಲೂ ರಾವ್ ಯುವ ಬರಹಗಾರ ಪ್ರಶಸ್ತಿ ಪುರಸ್ಕೃತರು ಶ್ರೀಮತಿ ಅಲಕಾ ಕಟ್ಟೆಮನೆ

* ಶಾ. ಬಾಲೂ ರಾವ್ ಅನುವಾದ ಪ್ರಶಸ್ತಿ ಪುರಸ್ಕೃತರು ಡಾ. ತಿಪ್ಪೇಸ್ವಾಮಿ

ಶ್ರೀಮತಿ ಕಮಲಿನಿ ಬಾಲೂರಾವ್ ರವರು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ಸ್ಥಾಪಿಸಿರುವ ಈ ಎರಡೂ ಪ್ರಶಸ್ತಿಗಳ ಮೌಲ್ಯ ತಲಾ ರೂ.25000/– ಆಗಿರುತ್ತದೆ.

**ಬಿ. ಎಂ, ಶ್ರೀ ಪ್ರತಿಷ್ಠಾನದ ಶೈಕ್ಷಣಿಕ ಚಟುವಟಿಕೆಗಳು–2014–15**

ಪ್ರತಿಷ್ಠಾನವು ಮೂಲಭೂತವಾಗಿ ಸಂಶೋಧನ ಕೇಂದ್ರವಾಗಿದೆ.ಇದರಲ್ಲಿ ಹಂಪಿ ವಿಶ್ವವಿದ್ಯಾಲಯದ ಎಂ.ಫಿಲ್ ಮತ್ತು ಪಿಎಚ್.ಡಿ ತರಗತಿಗಳನ್ನು ನಡೆಸಲಾಗುತ್ತದೆ.ಸಾಮಾನ್ಯವಾಗಿ ಆಗಸ್ಟ್ ತಿಂಗಳಲ್ಲಿ ಪ್ರಾರಂಭವಾಗುವ ತರಗತಿಗಳಲ್ಲಿ ನಾಲ್ಕು ತಿಂಗಳ ಕಾಲ ನಿಗದಿತ ಪಠ್ಯಕ್ರಮವನ್ನು ಬೋಧಿಸಲಾಗುತ್ತದೆ.ಐದು ದಿನಗಳು ತರಗತಿಗಳನ್ನು ನಡೆಸಿ, ವಾರದಲ್ಲಿ ಎರಡು ದಿನ ಗ್ರಂಥಾಲಯದಲ್ಲಿ, ತಮ್ಮ ಕೋರ್ಸ್‌ಗೆ ಸಂಬಂಧಿಸಿದ ಅನ್ಯ ಪುಸ್ತಕಗಳ ಪರಿಶೀಲನೆಗೆ ಅವಕಾಶ ಕಲ್ಪಿಸಿ, ಲೇಖನಗಳನ್ನು ಬರೆಸಲಾಗುತ್ತದೆ.ತಿಂಗಳಿಗೊಮ್ಮೆ ತರಗತಿಯ ಹಂತದಲ್ಲಿ ವಿಚಾರ ವಿನಿಮಯ, ವಿಚಾರ ಸಂಕಿರಣವನ್ನು ನಡೆಸಲಾಗುತ್ತಿದೆ. ಇದರ ಜೊತೆಗೆ ಪ್ರತಿಷ್ಠಾನ ಏರ್ಪಡಿಸುವ ದತ್ತಿ ಉಪನ್ಯಾಸಗಳಲ್ಲಿ ಕಡ್ಡಾಯವಾಗಿ ಭಾಗವಹಿಸುವ ವ್ಯವಸ್ಥೆಮಾಡಲಾಗಿದೆ.

**ಶಾಶ್ವತ ನಿಧಿ**

ಬೆಂಗಳೂರಿನ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಸದಸ್ಯರಾಗಿ ನಮಗೆಲ್ಲ ಬೆಂಬಲ ಹಾಗೂ ಪ್ರೋತ್ಸಾಹ ನೀಡಿ ನಮ್ಮೊಂದಿಗೆ ಸದಾ ಕಾಲ ಸಹಕರಿಸುತ್ತಿರುವ ಸದಸ್ಯರ ಗಮನಕ್ಕೆ :

ಪ್ರತಿಷ್ಠಾನದ ಮುಂದೆ ಹಸ್ತಪ್ರತಿಗಳ ರಕ್ಷಣೆ, ಡಿಜಿಟೀಕರಣ ಮತ್ತು ಅಧ್ಯಯನ, ಮಾಧ್ಯಮ ಕನ್ನಡ ಬರವಣಿಗೆಯ ಬಗೆಗಿನ ಸ್ನಾತಕೋತ್ತರ ಡಿಪ್ಲೊಮ ತರಗತಿಗಳನ್ನು ನಡೆಸುವುದು, ನಮ್ಮ ಹಿರಿಯ ಸಂಶೋಧಕರ ಬಗ್ಗೆ ಸಾಕ್ಷ್ಯಚಿತ್ರಗಳನ್ನು ತಯಾರಿಸುವ ಯೋಜನೆ, ಮೌಲಿಕ ಪುಸ್ತಕಗಳ ಪ್ರಕಟಣೆ , ಹಳಗನ್ನಡದ ವಿಶೇಷ ಅಧ್ಯಯನಕ್ಕಾಗಿ ವಿಶೇಷ ಕಾರ್ಯಕ್ರಮಗಳನ್ನು ರೂಪಿಸುವುದುಇಂತಹ ಹಲವಾರು ಯೋಜನೆಗಳು ಮುಂದಿವೆ. ಇವಕ್ಕೆಲ್ಲ ಹಣದ ಆವಶ್ಯಕತೆ ಇದೆ. ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನಡೆಸಲು ಕರ್ನಾಟಕ ಸರ್ಕಾರ ಸದ್ಯಕ್ಕೆ ಸ್ವಲ್ಪ ವಾರ್ಷಿಕ ಅನುದಾನವನ್ನು ನೀಡುತ್ತಿದ್ದರೂ, ಅದು ಕಾರ್ಯಕ್ರಮಗಳಿಗೇ ಸಾಕಾಗದಿರುವುದರ ಜೊತೆಗೆ, ಇತರ ಕಾರ್ಯಗಳಿಗೆ ಅದನ್ನು ಬಳಸುವಂತಿಲ್ಲ. ಇಂತಹ ಚಟುವಟಿಕೆಗಳಿಗೆ ಸಂಸ್ಥೆಯೇ ಸಂಪನ್ಮೂಲವನ್ನು ಕ್ರೋಡೀಕರಿಸಬೇಕಾಗುತ್ತದೆ

ಈ ದಿಸೆಯಲ್ಲಿ ಪ್ರತಿಷ್ಠಾನವು ಒಂದು ಶಾಶ್ವತ ನಿಧಿಯನ್ನು ಸ್ಥಾಪಿಸುವ ಆಲೋಚನೆಯಲ್ಲಿದೆ.ಈ ನಿಧಿಯ ಮೇಲಿನ ಬಡ್ಡಿ ಹಣದಿಂದ ನಮ್ಮ ಮುಂದಿನ ಯೋಜನೆಗಳನ್ನು ಕಾರ್ಯಗತಗೊಳಿಸುವುದು ನಮ್ಮ ಉದ್ದೇಶವಾಗಿರುತ್ತದೆ.ನಮ್ಮ ಉದ್ದೇಶ ಸಾಕಾರಗೊಳ್ಳಲು ತಮ್ಮಂತಹ ಉದಾರಿಗಳ ನೆರವು ಅಗತ್ಯ.

**Regd. with RNI, New Delhi. KARKAN 24541 dated 08.12.2014**

ತಮ್ಮಲ್ಲಿ ವಿಶೇಷವಾಗಿ ಮಾಡುವ ಮನವಿಯೆಂದರೆ, ತಾವು ಉದಾರವಾಗಿ ದಾನದ ರೂಪದಲ್ಲಿ ನಮ್ಮ ಸಂಸ್ಥೆಗೆ ಧನಸಹಾಯ ಮಾಡಬೇಕೆಂದು ತಮ್ಮನ್ನು ಕೋರುತ್ತೇವೆ. ತಮ್ಮಂತಹವರು ನಮ್ಮ ಚಟುವಟಿಕೆಗಳಿಗೆ ಬೆಂಬಲ ನೀಡಿದಲ್ಲಿ ಕನ್ನಡ ಸಾಹಿತ್ಯ ಕ್ಷೇತ್ರ ಮತ್ತಷ್ಟು ಶ್ರೀಮಂತವಾಗಲು ಸಾಧ್ಯವಾಗಬಹುದಾಗಿರುತ್ತದೆ.

ತಾವು ದತ್ತಿನಿಧಿಗಳನ್ನು ಸ್ಥಾಪಿಸುವ ಮೂಲಕ, ಶಾಶ್ವತ ನಿಧಿಗೆ ಉದಾರವಾಗಿ ಧನಸಹಾಯ ಮಾಡುವುದರ ಮೂಲಕ, ಪ್ರತಿಷ್ಠಾನದ ಪ್ರಕಟಣೆಗಳನ್ನು ಖರೀದಿಸುವುದರ ಮೂಲಕ, ಪ್ರತಿಷ್ಠಾನದ ಪ್ರಕಟಣೆಗಳ ಪ್ರಾಯೋಜಕತ್ವವನ್ನು ವಹಿಸಿಕೊಳ್ಳುವುದರ ಮೂಲಕ ಹಲವು ವಿಧಗಳಲ್ಲಿ ನಮ್ಮ ಜೊತೆ ಕೈ ಜೋಡಿಸಬಹುದಾಗಿರುತ್ತದೆ.

**ಪ್ರತಿಷ್ಠಾನಕ್ಕೆ ನೀಡುವ ನಿಧಿಯ ಮೊಬಲಗಿನ ಮೇಲೆ ಭಾರತ ಸರ್ಕಾರದ ಆದಾಯ ತೆರಿಗೆ ಕಾನೂನಿನ '80 ಜಿ' ಅನ್ವಯ ತೆರಿಗೆ ವಿನಾಯಿತಿ ದೊರೆಯುತ್ತದೆ.**

**ತಾವು ತಮ್ಮ ಕಾಣಿಕೆಗಳನ್ನು ಚೆಕ್/ಡಿಡಿ ಮೂಲಕ ಪ್ರತಿಷ್ಠಾನದ ಹೆಸರಿನಲ್ಲಿ ಪ್ರತಿಷ್ಠಾನದ ವಿಳಾಸಕ್ಕೆ ರವಾನಿಸಬಹುದು.**

ದಯವಿಟ್ಟು ನೆರವಾಗಿ, ನಮ್ಮೊಡನೆ ಕೈಜೋಡಿಸಿ, ಸಂಸ್ಥೆಯನ್ನು ಬೆಳೆಸಿ.

## ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಬೆಂಗಳೂರು ಗ್ರಂಥಾಲಯದ ಒಂದು ನೋಟ

**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದಲ್ಲಿ ಇಂದಿನವರೆಗೆ ಶೇಖರಣೆಯಾದ ಗ್ರಂಥಗಳ ಸಂಖ್ಯೆ 25692 ಹಾಗೂ ನಿಯತಕಾಲಿಕಗಳ ಸಂಖ್ಯೆ 7047. ಈ ಅಮೂಲ್ಯವಾದ ಗ್ರಂಥರಾಶಿಯನ್ನು ವೈಜ್ಞಾನಿಕವಾಗಿ ಸಂಘಟಿಸಿ ಎಲ್ಲ ಪುಸ್ತಕಗಳ ಗಣಕೀಕೃತ ಸೂಚಿಯನ್ನು ತಯಾರಿಸಲಾಗಿದೆ. ಪ್ರತಿಷ್ಠಾನದ ಗ್ರಂಥಾಲಯವು ಎಲ್ಲ ರೀತಿಯಿಂದ ಸುಸಜ್ಜಿತ ಗೊಂಡಿರುವದರಿಂದ ವಿದ್ವಾಂಸರು, ವಿದ್ಯಾರ್ಥಿಗಳು ಹಾಗೂ ಪ್ರತಿಷ್ಠಾನದ ಎಲ್ಲ ಸದಸ್ಯರು ಇದರ ಸದುಪಯೋಗ ಪಡೆದುಕೊಳ್ಳಬಹುದಾಗಿದೆ.**

**ಈ ಕೆಳಗೆ ನಮೂದಿಸಿದ ವಿಶೇಷ ಸಂಗ್ರಹ ಲಭ್ಯವಿದೆ**

1. **ಕನ್ನಡ ಭಾಷೆ,ಕನ್ನಡ ವ್ಯಾಕರಣ ,ಕನ್ನಡ ಪ್ರಾಚೀನ ಹಾಗೂ ಆಧುನಿಕ ಸಾಹಿತ್ಯ**
2 **ಕನ್ನಡ ವಿದ್ವಾಂಸರಾದ ರೈಸ, ಬಿಎಂಶ್ರೀ. ತೀನಂಶ್ರೀ, ಬೇಂದ್ರೆ, ಡಿವಿಜಿ, ಶಂಬಾ, ಕುವೆಂಪು, ಪುತಿನ, ಶಿವರಾಮ ಕಾರಂತ, ಎಂವಿಸೀ, ಮುಂತಾದವರ ವಿಶೇಷ ಸಂಗ್ರಹ**
3. **ಕನ್ನಡ ಭಾಷೆ, ಸಂಸ್ಕೃತಿ ಹಾಗು ಕನ್ನಡ ನಾಡಿನ ಹಿರಿಮೆಯನ್ನು ಎತ್ತಿಹಿಡಿಯುವದಕ್ಕಾಗಿ ಮೀಸಲಾದ ಸುಮಾರು 100 ಪುಸ್ತಕಗಳು ಲಭ್ಯವಿವೆ.**
4. **ರೈಸ್ ಎಪಿಗ್ರಾಫಿಯಾ ಕರ್ಣಾಟಿಕಾ ಸಂಪುಟಗಳು ಹಾಗು ಮೈಸೂರು ವಿಶ್ವವಿದ್ಯಾನಿಲಯದ ಸಂಪುಟಗಳು**

**Printed and published by** : B.R.Ravindranath on behalf of the BMSRI SMARAKA PRATISHTANA, 3rd Main Road, NR Colony, Bangalore - 560019 and printed at Annapoorneshwari Printers, No. 11, 10 'C' Main, 6th Block, Rajajinagar, Bangalore 10. and published at BMSRI SMARAKA PRATISHTANA, 3rd Main Road, NR Colony, Bangalore - 560019 Editor : B.R.Ravindranath

**ಅಚ್ಚಾದ ಪುಸ್ತಕ** ತೆರೆದ–ಅಂಚೆ

*ಶ್ರೀಮತಿ/ಶ್ರೀ*.....................................................................................

.............................................................................................

.............................................................................................

*ವಿಳಾಸ*
**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**
ಬಿ.ಎಂ.ಶ್ರೀ. ಕಲಾಭವನ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು – ೧೯
ದೂರವಾಣಿ : ೨೬೬೧೫೮೭೭